ಎಸ್. ಎ. ಜಗನ್ನಾಥ

# ಅಥಣಿ ತಾಲ್ಲೂಕಿನ ಕಲ್ಯಾಣ ಚಾಳುಕ್ಯರ ದೇವಾಲಯಗಳು: ಒಂದು ಅಧ್ಯಯನ

ಕರ್ನಾಟಕದಲ್ಲಿ ಕಂಡುಬರುವ ವಾಸ್ತುಕಲಾ ಇತಿಹಾಸವನ್ನು ಸೂಕ್ಷ್ಮವಾಗಿ ವಿವೇಚಿಸಿದರೆ ಹಲವು ಪರಿವರ್ತನೆಯ ಕಲಾಶೈಲಿಗಳ ಹಂತಗಳು ಗೋಚರವಾಗುತ್ತವೆ. ಬಾದಾಮಿ, ಐಹೊಳೆ ಮತ್ತು ಪಟ್ಟದಕಲ್ಲಿನ ದೇವಾಲಯಗಳು ತಮ್ಮದೇ ಆದ ವೈಶಿಷ್ಟ್ಯಪೂರ್ಣವಾದ ಲಕ್ಷಣಗಳನ್ನು ರೂಢಿಸಿಕೊಂಡು ಚಾಳುಕ್ಯ ಶೈಲಿಯವೆಂದೇ ಪ್ರಸಿದ್ಧಿ ಪಡೆದಿವೆ. ಈ ಶೈಲಿಯು ದಕ್ಷಿಣ ಭಾರತದಲ್ಲಿ ಜನಪ್ರಿಯವಾಗಿದ್ದ ವೇಸರ ಅಥವಾ ದ್ರಾವಿಡಶೈಲಿಗಿಂತಲೂ ಪ್ರತ್ಯೇಕವಾಗಿತ್ತು. ಅನಂತರ ಕರ್ನಾಟಕವನ್ನಾಳಿದ ರಾಷ್ಟ್ರಕೂಟರ ಕಾಲದಲ್ಲಿ ದೇವಾಲಯಗಳ ನಿರ್ಮಾಣದಲ್ಲಿ ಹಲವು ಪ್ರಮುಖ ಪರಿವರ್ತನೆಗಳು ರೂಢಿಗೆ ಬಂದವು. ಎತ್ತರವಾದ ವೃತ್ತಾಕಾರವಾದ ಸ್ತಂಭಗಳು, ಬೃಹದಾಕಾರವಾದ ವಿಮಾನ ರಚನೆ ಹಾಗೂ ವಾಸ್ತು ನಿವೇಶನದಲ್ಲಿ ವೈಶಾಲ್ಯತೆ. ಮುಂತಾದವುಗಳು ಈ ಶೈಲಿಯ ಪ್ರಮುಖ ಲಕ್ಷಣವಾಗಿ ಬೆಳೆದು ಬಂದವು. ರಾಷ್ಟ್ರಕೂಟರ ಕಾಲದ ಶಿಲ್ಪಕಲಾ ಕೃತಿಗಳು ಅಂದಿನ ಜನಜೀವನದ ಅಭಿವ್ಯಕ್ತತೆಯೋ ಎಂಬಂತೆ ಸರಳ ಉಡುಪು ಹಾಗೂ ಆಭರಣ ವಿನ್ಯಾಸಗಳನ್ನು ಹೊಂದಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ.

ರಾಷ್ಟ್ರಕೂಟರ ಪತನದ ತರುವಾಯ ಬಾದಾಮಿ ಚಾಳುಕ್ಯರ ಮುಂದುವರಿಕೆ ಎಂದು ಹೇಳಿಕೊಂಡು ಬಂದ ಕಲ್ಯಾಣ ಚಾಳುಕ್ಯರು ವಿಶಿಷ್ಟವಾದ ದೇವಾಲಯ ವಾಸ್ತುಶಿಲ್ಪ ಶೈಲಿಯನ್ನು ಕರ್ನಾಟಕದ ಉತ್ತರಭಾಗಗಳಲ್ಲಿ ಹೇರಳವಾಗಿ ಪರಿಚಯಿಸಿದರು. ವಾಸ್ತುಶಿಲ್ಪ ಬೆಳವಣಿಗೆಯ ದೃಷ್ಟಿಯಿಂದ ಕಲ್ಯಾಣ ಚಾಳುಕ್ಯರ ಕಾಲವನ್ನು ಒಂದು ಪರಿವರ್ತನೆಯ (transition) ಯುಗವೆಂದು ಹಲವು ವಿದ್ವಾಂಸರುಗಳ ಅಭಿಪ್ರಾಯವಾಗಿದೆ. ಪ್ರಮುಖವಾಗಿ ಚಾಳುಕ್ಯರ ಪ್ರಾರಂಭದ ಕಾಲದಲ್ಲಿ ನಿರ್ಮಿತವಾದ ಹಲವು ದೇವಾಲಯಗಳು ರೂಢಿಯಲ್ಲಿದ್ದ ರಾಷ್ಟ್ರಕೂಟರ ಕಲಾಶೈಲಿಯ ಲಕ್ಷಣಗಳನ್ನು ಅಲ್ಪಸ್ವಲ್ಪ ಬದಲಾವಣೆಗಳೊಡನೆ ರೂಢಿಗೆ ಬಂದದ್ದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಉದಾಹರಣೆಗೆ, ಕದಂಬನಾಗರ ಶಿಖರ, ವೃತ್ತಾಕಾರವಾದ ಬೃಹದ್ಗಾತ್ರದ(massive) ಸ್ತಂಭಗಳು,ನವರಂಗದ ಆಂತರಿಕ ವಿನ್ಯಾಸದಲ್ಲಿ ವಿಸ್ತರಣೆ, ದೇವಾಲಯದ ಮುಂಭಾಗದಲ್ಲಿ ವ್ಯಕ್ತವಾಗುವ ಮುಖಮಂಟಪ ಅಥವಾ ಬೇರೆ ಯಾವುದೇ ವಿಸ್ತೃತ ಭಾಗ ಹಾಗೂ ದೇವಾಲಯದ ಸ್ಥಳವಿನ್ಯಾಸದಲ್ಲಿ ವೈಶಾಲ್ಯತೆ ಮುಂತಾದ ಪ್ರಮುಖ ಬದಲಾವಣೆಗಳು ಕಲ್ಯಾಣ ಚಾಳುಕ್ಯರ ಶೈಲಿಯಲ್ಲಿ ವ್ಯಕ್ತವಾಗುವುದು ಗಮನೀಯವಾಗಿದೆ. ಈ ಕಾಲದ ಶಿಲ್ಪಕಲಾಕೃತಿಗಳು ಅಂದಿನ ಜನಜೀವನದ ಅಭಿವ್ಯಕ್ತತೆಯೋ ಎಂಬಂತೆ ಸರಳ ವೇಷಭೂಷಣ ಹಾಗೂ ಆಭರಣಗಳ ಸಹಜ ಅಲಂಕಾರಗಳು ಚಾಳುಕ್ಯರ ಶೈಲಿಯ ಒಂದು ಬದಲಾವಣೆಯ ಪ್ರತಿರೂಪವೆನ್ನಬಹುದು. ಬೆಳಗಾವಿ ಜಿಲ್ಲೆಯ ಹಲಸಿ, ಗೋಕಾಕ್ ಜಲಪಾತದ ಬಳಿ ಇರುವ ದೇವಾಲಯಗಳು ಹಾಗೂ ಸೌಂದತ್ತಿ, ಬೈಲಹೊಂಗಲ, ಹೂಲಿ ಮುಂತಾದ ಪ್ರದೇಶಗಳಲ್ಲಿ ಕಲ್ಯಾಣ ಚಾಳುಕ್ಯರ ಶೈಲಿಯ ದೇವಾಲ

ಯಗಳು ನೂರಕ್ಕೂ ಅಧಿಕ ಸಂಖ್ಯೆಯಲ್ಲಿ ಕಂಡುಬರು ತ್ತವೆ. ಆದರೆ, ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ ದೇವಾಲಯಗಳು ಖಚಿತವಾಗಿಯೂ ವೈಶಿಷ್ಟ್ಯಪೂರ್ಣ ಲಕ್ಷಣಗಳನ್ನು ವ್ಯಕ್ತಪಡಿಸುವುದು ಹಾಗೂ ವಾಸ್ತುಶಿಲ್ಪ ಅಧ್ಯಯನದ ದೃಷ್ಟಿಯಿಂದ ಆಸಕ್ತಿಯುತವಾಗಿವೆ.

ಅಥಣಿ ತಾಲ್ಲೂಕಿನ ದಕ್ಷಿಣದ ಗಡಿಯಲ್ಲಿ ಅರ್ಧ ಚಂದ್ರಾಕಾರವಾಗಿ ವಿನ್ಯಾಸ ಹೊಂದಿರುವ ಕೃಷ್ಣಾನದಿಯ ಎಡದಂಡೆಯು ಚಾಳುಕ್ಯ ವಾಸ್ತುಶಿಲ್ಪದ ಬಹುಮುಖ್ಯ ವಾದ ಕೇಂದ್ರವೆನ್ನಬಹುದು. ಈ ಪ್ರದೇಶದಲ್ಲಿ ಪೂರ್ವೇತಿಹಾಸದ ಹಲವು ನಿವೇಶನಗಳನ್ನು ಈಗಾಗಲೇ ಗುರುತಿಸಿರುವುದರಿಂದ ಐತಿಹಾಸಿಕವಾಗಿ ಈ ಕೇಂದ್ರಗಳ ಮಹತ್ವವು ವ್ಯಕ್ತವಾಗುತ್ತದೆ. ಅಥಣಿಯನ್ನು ಮಹಾ ರಾಷ್ಟ್ರದಿಂದ ಪ್ರವೇಶ ಮಾಡುವ ಕರ್ನಾಟಕ(ಪಶ್ಚಿಮದ) ಮಹಾದ್ವಾರವೆಂದು ಕರೆಯಲಾಗಿದೆ. ಅನೇಕ ವಿದೇಶಿ ಯಾತ್ರಿಕರು ಬಿಜಾಪುರಕ್ಕೆ ಭೇಟಿ ನೀಡಿದಾಗ ಅಥಣಿಯ ಮೂಲಕವೇ ಪ್ರಯಾಣಿಸಿದರೆನ್ನುವುದು ಇಲ್ಲಿ ಗಮನಿಸ ಬೇಕಾದ ಅಂಶ. ಅಥಣಿ ನಗರದಲ್ಲೇ ಹಲವಾರು ದೇವಾಲಯಗಳಿದ್ದು, ನಗರದ ಮಧ್ಯಭಾಗದಲ್ಲಿರುವ ಅಮೃತಲಿಂಗೇಶ್ವರ ದೇವಾಲಯವು ಚಾಳುಕ್ಯರ ಶೈಲಿ ಯಲ್ಲಿ ನಿರ್ಮಿತವಾದ ಸುಂದರ ಕಟ್ಟಡ. ನವರಂಗ ದ್ವಾರದ ಎರಡೂ ಕಡೆಗಳಲ್ಲಿ ಜಾಲಂಧ್ರಗಳಿವೆ ಮತ್ತು ಮುಂಭಾಗದ ಎರಡೂ ಕಂಬಗಳು ಲೇಥ್‌ನಲ್ಲಿ ಸಿದ್ಧ ಗೊಂಡಿದ್ದು, ಅತ್ಯಂತ ಕುತೂಹಲಕಾರಿ ಸೂಕ್ಷ್ಮ ಕೆತ್ತನೆ ಗಳನ್ನು ಹೊಂದಿವೆ. ಕೃಷ್ಣಾನದಿಯ ಅರ್ಧಚಂದ್ರಾ ಕಾರವಾದ ಎಡದಂಡೆಯ ಉದ್ದಕ್ಕೂ ಇರುವ ಪುರಾತನ ಸ್ಥಳಗಳೆಂದರೆ ಐನಾಪುರ, ಸಪ್ತಸಾಗರ, ಸತ್ತಿ, ಸವದಿ ಮುಂತಾದವು. ಈ ಸ್ಥಳಗಳು ಮೂಲತಃ ಪೂರ್ವೇತಿ ಹಾಸದ ಕೇಂದ್ರಗಳಾಗಿರುವುದು ಈಚೆಗೆ ಸ್ಪಷ್ಟವಾಗಿದೆ. ಈ ಸ್ಥಳಗಳಲ್ಲಿ ಹಾಗೂ ಸುತ್ತಮುತ್ತಲ ಇತರೆ ಪ್ರದೇಶ ಗಳಲ್ಲಿ ವ್ಯಕ್ತವಾಗುವ ವಿಶೇಷ ಆಕರ್ಷಣೆ ಎಂದರೆ ವಿಪುಲ ನಾಗಿರುವ ಕಲ್ಯಾಣ ಚಾಳುಕ್ಯರ ದೇವಾಲಯಗಳು. ಕೃಷ್ಣಾನದಿಯ ತೀರದಲ್ಲಿ ಕಂಡುಬರುವ ಹಲವು ದೇವಾ ಲಯಗಳನ್ನು ಸ್ಥಳಗಳ ಸರದಿಯಲ್ಲಿ ಇಲ್ಲಿ ಅಧ್ಯಯನ ಮಾಡಲಾಗಿದೆ.

ಅಥಣಿಯಿಂದ ಪಶ್ಚಿಮಕ್ಕೆ ೨೪ ಕಿ.ಮೀ. ದೂರ ದಲ್ಲಿರುವ ಪ್ರಾಚೀನ ಸ್ಥಳವಾದ ಬಾಡಗಿಯನ್ನು ಸಮೀ ಪದ ಕೊಕಟನೂರು ಶಾಸನದಲ್ಲಿ 'ಬಾಡಿಗೆ' ಎಂದು ಕರೆಯ ಲಾಗಿದೆ. ಆ ಗ್ರಾಮದ ಪ್ರವೇಶದ್ವಾರದಲ್ಲಿ ಕಲ್ಮೇಶ್ವರ ಎಂದು ಸ್ಥಳೀಯವಾಗಿ ಕರೆಯಲ್ಪಡುವ ಸುಂದರ ಕಲ್ಯಾಣ ಚಾಳುಕ್ಯರ ಶೈಲಿಯಲ್ಲಿ ನಿರ್ಮಿತವಾಗಿರುವ ತ್ರಿಕೂಟಾಚಲ ದೇವಾಲಯವಿದೆ. ಈ ದೇವಾಲಯದ ನವರಂಗದಲ್ಲಿ ಮೂರು ಮಹಾದ್ವಾರಗಳಿದ್ದು, ಗರ್ಭ ಗೃಹದ ದ್ವಾರದ ಮೇಲ್ಭಾಗದ ಭಿತ್ತಿಯಲ್ಲಿ ಕಿರಾತಾ ರ್ಜುನೀಯವನ್ನು ಪ್ರತಿನಿಧಿಸುವ ಸುಂದರ ಉಬ್ಬುಶಿಲ್ಪ ವಿದೆ. ನವರಂಗದ ಮಹಾದ್ವಾರದ ಮೇಲ್ಭಾಗದಲ್ಲಿ ಸಪ್ತಮಾತೃಕೆಯರ ಜೋಡು ಶಿಲ್ಪವಿದೆ. ನವರಂಗ ದಲ್ಲಿ ಲೇಥ್‌ನಿಂದ ತಿರುಗಿಸಲ್ಪಟ್ಟಿರುವ ಚಾಳುಕ್ಯ ಶೈಲಿಯ ಕಂಬಗಳು ನುಣುಪಾಗಿದ್ದು ಅಲಂಕೃತ ಗೊಂಡಿವೆ. ಹೊರಭಾಗದಲ್ಲಿ ದೇವಾಲಯದ ಸುತ್ತಲೂ ಮಣ್ಣಿನ ರಾಶಿಯು ಆವರಿಸಿದ್ದರೂ ಗರ್ಭಗೃಹದ ಹೊರಪಾರ್ಶ್ವದ ಭಿತ್ತಿಯಲ್ಲಿ ಉಮಾ ಮಹೇಶ್ವರ, ಚಾಮರಧಾರಿಣಿಯರು, ಗಣಪತಿ, ನರ್ತನ ಭಂಗಿಯಲ್ಲಿರುವ ಮದನಿಕೆಯರು, ಸಂಗೀತಗಾರರು ಮತ್ತು ಹಲವಾರು ಮಿಥುನ ಉಬ್ಬುಶಿಲ್ಪಗಳು ಕಂಡು ಬರುತ್ತವೆ. ಈ ದೇವಾಲಯದ ಮುಂಭಾಗದ ಜಗಲಿ ಯಲ್ಲಿ ಅಪ್ರಕಟಿತ ಶಾಸನವು ಹೂತುಹೋಗಿದ್ದು, ಅದರ ಮೇಲ್ಭಾಗವು ಮಾತ್ರ ಕಾಣಿಸುತ್ತದೆ.

ಬಳ್ಳಿಗೇರಿಯು ಇನ್ನೊಂದು ಪ್ರಾಚೀನ ಸ್ಥಳ ವಾಗಿದ್ದು, ಅಥಣಿಯಿಂದ ೧೮ ಕಿ. ಮೀ. ದೂರದಲ್ಲಿದೆ. ಪ್ರಾಚೀನ ಶಾಸನಗಳಲ್ಲಿ ಈ ಸ್ಥಳವನ್ನು 'ಬಾಳಂಗೇರಿ' ಎಂದು ಪದೇ ಪದೇ ಉಲ್ಲೇಖಿಸಲಾಗಿದೆ. ಇಲ್ಲಿ ಸ್ಥಳೀಯ ವಾಗಿ ಕರೆಯಲ್ಪಡುವ ಬಸವಣ್ಣನ ದೇವಾಲಯವು ಬಹು ತೇಕವಾಗಿ ಅಲ್ಲಿಯ ಶಾಸನಗಳಲ್ಲಿ ಉಕ್ತವಾಗಿರುವ ನರ ಸಿಂಹನ ದೇವಾಲಯವೆಂದು ಹೇಳಬಹುದು. ಏಕೆಂದರೆ ಈ ಚಾಳುಕ್ಯ ಶೈಲಿಯ ದೇವಾಲಯವು ತ್ರಿಕೂಟಾಚಲ ವಾಗಿದೆ ಹಾಗೂ ಮೂರು ಗರ್ಭಗುಡಿಗಳಲ್ಲೂ ಶಿವ ಲಿಂಗವಿದ್ದರೂ ಮುಖ್ಯ (ಕೇಂದ್ರ) ಗರ್ಭಗೃಹದ ಲಲಾಟ ದಲ್ಲಿ ಲಕ್ಷ್ಮಿನರಸಿಂಹನ ಉಬ್ಬುಶಿಲ್ಪವಿದೆ. ಬಸವಣ್ಣನ ದೇವಾಲಯದ ಸಮೀಪದಲ್ಲೇ (ಅರ್ಧಭಾಗ ಮಣ್ಣಿನಲ್ಲಿ ಹೂತಿರುವ) ವೀರಭದ್ರ ದೇವಾಲಯವೊಂದು ಇದೆ.

ಇದೂ ತ್ರಿಕೂಟಾಚಲವಾಗಿದ್ದು ಕಲ್ಯಾಣ ಚಾಳುಕ್ಯರ ಶೈಲಿಯ ಕಂಬಗಳನ್ನು ಹೊಂದಿದೆ. ಇದೇ ದೇವಾಲಯದ ಪರಿಸರದಲ್ಲಿರುವ ಮತ್ತೊಂದು ಶಾಸನವು, ಪಾರ್ಶ್ವನಾಥ ತೀರ್ಥಂಕರ ಬಸದಿಗೆ ನೀಡಿರುವ ಹಲವು ದಾನಗಳನ್ನು ಕುರಿತು ತಿಳಿಸುತ್ತದೆ. ಇದರ ಪ್ರಕಾರ, ಚಾಳುಕ್ಯ ಬಿಜ್ಜಳನ ಅಧಿಕಾರಿಯಾದ ಕಾಳಿದಾಸ ಚಂಪು ಎಂಬುವನು ತಾನು ಕಟ್ಟಿಸಿದ ಪಾರ್ಶ್ವನಾಥ ಬಸದಿಗೆ ಹಲವು ದಾನಗಳನ್ನು ನೀಡಿದನು. ಬಹುಶಃ ವೀರಭದ್ರ ದೇವಾಲಯವು(?) ಬಸದಿಯಾಗಿದ್ದಿರಬಹುದು. ಈಗ ಈ ಸ್ಥಳದಲ್ಲಿ ಯಾವ ಜೈನ ಕುಟುಂಬಗಳೂ ಕಂಡುಬರುವುದಿಲ್ಲ.

ಅಥಣಿಯಿಂದ ೨೪ ಕಿ.ಮೀ. ಪಶ್ಚಿಮ ದಿಕ್ಕಿನಲ್ಲಿರುವ ಕೃಷ್ಣಾನದಿಯ ಎಡದಂಡೆಯಲ್ಲಿ ಇರುವ ಮತ್ತೊಂದು ಪುರಾತನ ಸ್ಥಳವೆಂದರೆ ಐನಾಪುರ; ಕಲ್ಯಾಣ ಚಾಳುಕ್ಯರ ಕಾಲದ ಪ್ರಸಿದ್ಧ ಜೈನಕೇಂದ್ರ. ಸ್ಥಳೀಯರು ಐನಾಪುರವನ್ನು ಪುರಾತನ 'ಅಯ್ಯನಪುರ' ಅಥವಾ 'ಜೈನಾಪುರ ಎಂದು ಹೇಳುವರು. ಅಯ್ಯನಪುರ ಎಂದರೆ ಪುರಾತನ ಅಗ್ರಹಾರವೆಂದು ಹಲವು ವಿದ್ವಾಂಸರು ತರ್ಕಿಸಿರುವರು. ಊರಿನ ಮಧ್ಯದಲ್ಲಿರುವ ಎರಡು ಪುರಾತನ ಬಸದಿಗಳೆಂದರೆ ಆದಿನಾಥ ಮತ್ತು ಪಾರ್ಶ್ವನಾಥ. ಆದಿನಾಥ ಬಸದಿಯೊಳಗಡೆ ಇರುವ ಆದಿನಾಥ ವಿಗ್ರಹವನ್ನು ಬಿಜಾಪುರದ ಬಳಿಯ ಗ್ರಾಮವೊಂದರಿಂದ ಇಲ್ಲಿಗೆ ತಂದಿರಿಸಲಾಗದೆಯೆಂಬುದು ಸ್ಥಳೀಯರ ಹೇಳಿಕೆ. ನವರಂಗದ ಒಳಗೆ ಅರ್ಧಮಂಟಪದ ದ್ವಾರದ ಬಳಿ ಇತ್ತೀಚೆಗೆ ಪ್ರತಿಷ್ಠಾಪಿಸಿರುವ ಗೊಮ್ಮಟೇಶ್ವರನ ವಿಗ್ರಹವಿದೆ. ಪಾರ್ಶ್ವನಾಥ ಬಸದಿಯೂ ಕಲ್ಯಾಣ ಚಾಳುಕ್ಯರ ಶೈಲಿಯಲ್ಲಿಯೇ ನಿರ್ಮಿತವಾಗಿರುವ ಒಂದು ಸುಂದರ ಕಟ್ಟಡ. ಇಲ್ಲಿಯ ಮೂಲವಿಗ್ರಹವು ಭಿನ್ನವಾಗಿರುವ ಕಾರಣ ಪೂಜೆಗೊಳ್ಳದ ಅದನ್ನು ನವರಂಗದ ಬಲಭಾಗದಲ್ಲಿ ಇರಿಸಲಾಗಿದೆ. ಇದರ ಪೀಠದ ಮೇಲೆ ಚಾಳುಕ್ಯರ ಶೈಲಿಯ ಸವೆದುಹೋದ ಅಪ್ರಕಟಿತ ಶಾಸನವಿದೆ. ಈ ಮೂರ್ತಿಯ ಪಕ್ಕದಲ್ಲೆ ಧ್ಯಾನಾಸಕ್ತನಾಗಿ ಕುಳಿತಿರುವ ಮಹಾವೀರನ ಚಾಳುಕ್ಯ ಶೈಲಿಯ ವಿಗ್ರಹವಿದ್ದು, ಇದರ ಪೀಠದ ಮೇಲೂ ಅಪ್ರಕಟಿತ ಶಾಸನವಿದೆ. ಮುಖಮಂಟಪದ ಎಡಭಾಗದಲ್ಲಿರುವ ಚಾಳುಕ್ಯ ಕಂಬವೊಂದರಲ್ಲಿ ಸಹಸ್ರ ಜಿನಬಿಂಬಗಳನ್ನು ಉಬ್ಬುಶಿಲ್ಪದೋಪಾದಿಯಾಗಿ ಸುಂದರವಾಗಿ ಕೆತ್ತಲಾಗಿದೆ. ದೇವಾಲಯದ ಎದುರಿಗೆ ಸುಮಾರು ೧೨ ಮೀಟರ್ ಎತ್ತರದ ಮಾನಸ್ತಂಭವಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ಇತ್ತೀಚೆಗೆ ನಿರ್ಮಿಸಲಾಗಿರುವ ಆಯತಾಕಾರವಾದ ಗೋಪುರವಿದೆ. ಈ ಸ್ಥಳದ ಹೊರಭಾಗದಲ್ಲಿ ಕಾಣಸಿಗುವ 'ಗುಂಫ' ಎಂದು ಕರೆಯಲಾಗುವ ಜೈನರ ಖಾಸಗಿ ಆವರಣದಲ್ಲಿ ಚಾಳುಕ್ಯ ಶೈಲಿಯ ಅಪೂರ್ಣವಾದ ದೇವಾಲಯದ ಗರ್ಭಗೃಹ ಮತ್ತು ಅರ್ಧಮಂಟಪ ಮಾತ್ರ ಇವೆ. ಗರ್ಭಗೃಹದ ಸುತ್ತಲೂ ವಿಪುಲವಾದ ಕೆತ್ತನೆಯುಳ್ಳ ದೇವಕೋಷ್ಟಗಳು ಕಂಡುಬಂದರೂ ಅವುಗಳಲ್ಲಿ ಯಾವುದೇ ಶಿಲ್ಪಗಳು ಇಲ್ಲ. ಆದರೆ ಶಿಲ್ಪಗಳನ್ನು ಬಿಡಿಸುವ ಪೂರ್ವಯೋಜನೆಗಾಗಿ ರಚಿಸಲಾಗಿರುವ ರೇಖಾವಿನ್ಯಾಸಗಳು ಈಗ ಹೊರಭಾಗದ ಗೋಡೆಯ ಮೇಲೆ ಕಾಣಿಸುತ್ತವೆ. ಗರ್ಭಗೃಹದ ಮೇಲಿರುವ ಶಿಥಿಲವಾದ ಕದಂಬನಾಗರ ಶಿಖರವು ಸೂರ್ಯನ ಕಿರಣಗಳಿಗೆ ಪ್ರತಿಬಿಂಬಿಸುವಷ್ಟು ನುಣುಪಾಗಿದೆ. ಐನಾಪುರದಲ್ಲಿ ಇನ್ನೂ ಕೆಲವು ಅನಂತರದ ಕಾಲದ ದೇವಾಲಯಗಳೂ ಕಾಣಸಿಗುತ್ತವೆ.

ಕೃಷ್ಣಾನದಿಯ ಎಡದಂಡೆಯ ಮೇಲಿರುವ ಸಪ್ತಸಾಗರವು ಅಥಣಿ ತಾಲ್ಲೂಕಿನ ರಮಣೀಯ ಹಾಗೂ ಮುಖ್ಯವಾದ ಪೂರ್ವೇತಿಹಾಸದ ಪ್ರದೇಶವೆನ್ನಬಹುದು. ಇಲ್ಲಿ ಇತ್ತೀಚಿನವರೆಗೂ ಬೂದಿಹಳ್ಳಗಳು (ash mounds) ಇದ್ದುವೆಂದು ತಿಳಿದುಬರುತ್ತದೆ. ನದಿಯಲ್ಲಿ ಆಳಕ್ಕೆ ಈಸಿಹೋದರೆ ಹಲವಾರು ಶಿವಲಿಂಗಾಕಾರದ ಶಿಲೆಗಳು ಕಂಡುಬರುತ್ತವೆಂದು ಸ್ಥಳೀಯರು ಹೇಳುವರು. ಬಹುಶಃ ಇವು ಪ್ರಾಚೀನ ದೇವಾಲಯದ (ಈಗ ಕಾಣಸಿಗುವುದಿಲ್ಲ) ಮುಳುಗಡೆಯ ಭಾಗಗಳಿರಬಹುದು.

ಅಥಣಿಯಿಂದ ದಕ್ಷಿಣಕ್ಕೆ ಹೋದರೆ(೧೦ ಕಿ.ಮೀ.) ಸಿಗುವ ಪುರಾತನ ಸ್ಥಳವೆಂದರೆ 'ಸತ್ತಿ'ಅಥವಾ ಪ್ರಾಚೀನ ಸತ್ತತ್ತಿ ಅಗ್ರಹಾರ. ಇದು ಕೃಷ್ಣಾನದಿಗೆ ಅಂಟಿಕೊಂಡಂತಿರುವ ಪೂರ್ವೇತಿಹಾಸದ ಸ್ಥಳವೂ ಹೌದು. ಶಾಸನಗಳಲ್ಲಿ (೧೧೮೩) ಈ ಸ್ಥಳವು ಮಹಾಸತ್ತತ್ತಿ ಅಗ್ರಹಾರ ಎಂದು ಪದೇಪದೇ ಉಲ್ಲೇಖಗೊಂಡಿದೆ. ಪ್ರಸ್ತುತ ಇಲ್ಲಿ ಕಂಡುಬರುವ ಕಲ್ಮೇಶ್ವರ,ಮಲ್ಲಿಕಾರ್ಜುನ ಮತ್ತು ತ್ರಿಕೂಟಾಚಲವೆಂದು ಕರೆಯಲ್ಪಡುವ ಲಕ್ಷ್ಮೀನರ

ಸಿಂಹನ ದೇವಾಲಯಗಳು, ಎಲ್ಲವೂ ಕಲ್ಯಾಣ ಚಾಳುಕ್ಯರ ಶೈಲಿಯಲ್ಲಿ ನಿರ್ಮಿತವಾಗಿವೆ. ಕಲ್ಮೇಶ್ವರ ದೇವಾಲಯವು ಒಂದು ಗರ್ಭಗೃಹ, ಅರ್ಧಮಂಟಪ ಹಾಗೂ ನವರಂಗ ಗಳಿಂದ ಕೂಡಿದ್ದು, ಮೊದಲೆರಡೂ ದ್ವಾರಗಳ ಅಕ್ಕ ಪಕ್ಕದಲ್ಲಿ ಜಾಲಂಧ್ರಗಳಿಂದ ಅಲಂಕೃತಗೊಂಡಿವೆ. ನವ ರಂಗದ ಒಂದು ಕಂಬದ ಮೇಲೆ ಅಪ್ರಕಟಿತ ಶಾಸನ ವೊಂದು ಕಂಡುಬರುತ್ತದೆ ಹಾಗೂ ಇತರೆ ಕಂಬಗಳು ಬೃಹದ್ ಆಕಾರದವಾಗಿದ್ದು ಲೇಥ್‌ನಿಂದ ತಿರುಗಿಸಲ್ಪ ಟ್ಟಿವೆ. ನವರಂಗದ ಛಾವಣಿಯಲ್ಲಿರುವ ಆಳವಾದ ಸುಂದರ ಕೆತ್ತನೆಗಳಿಂದ ಕೂಡಿದ ಭುವನೇಶ್ವರಿಯು ಬಹಳ ಆಕರ್ಷ ಣೀಯವಾದುದು. ಮುಂಭಾಗದಲ್ಲಿರುವ ಮುಖ ಮಂಟಪವನ್ನು ಮಣ್ಣಿನ ಗೋಡೆಗಳಿಂದ (ಇತ್ತೀಚಿನದು) ಮುಚ್ಚಲಾಗಿದ್ದು, ಮಧ್ಯದಲ್ಲಿ ಕಿರುದಾದ ದ್ವಾರವು ಇದೆ. ಸಮೀಪದಲ್ಲೇ ಇನ್ನೆರಡು ಅಪ್ರಕಟಿತ ಶಾಸನಶಿಲೆಗಳಿದ್ದು ಅವುಗಳಿಗೆ ಗಾಢವಾದ ತೈಲಬಣ್ಣವನ್ನು ಲೇಪಿಸಲಾಗಿದೆ. ಆದರೂ ಶಾಸನದ ಅಕ್ಷರಗಳು ಕ್ರಿ. ಶ. ೧೨ನೆಯ ಶತ ಮಾನದ ಸ್ವರೂಪವನ್ನು ವ್ಯಕ್ತಪಡಿಸುತ್ತವೆ. ಈ ದೇವಾಲಯದ ಸಮೀಪವೇ ಮಲ್ಲಿಕಾರ್ಜುನ ದೇವಾಲಯವು ಕಂಡುಬರುತ್ತದೆ. ಇದು ಸಹಾ ಚಾಳುಕ್ಯರ ಶೈಲಿಯಲ್ಲೆ ನಿರ್ಮಿತವಾಗಿರುವ ಕಿರಿ ದಾದ ಕಟ್ಟಡ. ಇದರ ಬಹುತೇಕ ಭಾಗವು ಶಿಥಿಲ ಗೊಂಡಿದೆ. ಈ ದೇವಾಲಯದ ಎದುರಿಗೆ ಮಣ್ಣಿನ ರಾಶಿಯು ಬಿದ್ದಿದ್ದು ಅದರಲ್ಲಿ ಹಳೆಯ ದೇವಾಲಯ ಕಟ್ಟಡಕ್ಕೆ ಸೇರಿದ ಅನೇಕ ಶಿಲಾಮೂರ್ತಿಗಳು ಹಾಗೂ ಕಂಬದ ಭಾಗಗಳು ಮಣ್ಣಿನಲ್ಲಿ ಹುದುಗಿರುವುದು ಕಂಡು ಬರುತ್ತದೆ. ಇವೆರಡೂ ದೇವಾಲಯಗಳಿಂದ ಸ್ವಲ್ಪ ದೂರದಲ್ಲಿ ಊರಿನ ಮಧ್ಯದಲ್ಲಿರುವುದೇ ತ್ರಿಕೂಟಾಚಲ ಲಕ್ಷ್ಮೀನರಸಿಂಹನ ದೇವಾಲಯ. ಈ ದೇವಾಲಯದಲ್ಲಿ ಮೂರು ಗರ್ಭಗುಡಿಗಳಿದ್ದು, ಮಧ್ಯದ ಗರ್ಭಗೃಹವು ಯಾವುದೇ ದೇವತಾಮೂರ್ತಿ ಇಲ್ಲದಿದ್ದರೂ ಒಂದು ಚತುರ್ಮುಖ ಬ್ರಹ್ಮನ ನಿಂತಿರುವ ಶಿಲಾಮೂರ್ತಿಯನ್ನು ಪಾಣಿಪೀಠದ ಮೇಲೆ ಇರಿಸಿ ಗೋಡೆಗೆ ವಾಲಿಸಿ ನಿಲ್ಲಿಸಲಾಗಿದೆ. ಇದರ ಎಡಗಡೆ ಇರುವ ಇನ್ನೊಂದು ಗರ್ಭಗೃಹದಲ್ಲಿ ಜನಾರ್ಧನನ(ವಿಷ್ಣು) ಸುಮಾರು ಒಂದು ವರೆ ಮೀಟರ್ ಎತ್ತರದ ಅತ್ಯಂತ ಸುಂದರವಾದ ಶಿಲಾ ಮೂರ್ತಿಯು ಕಂಡುಬರುತ್ತದೆ. ಇದನ್ನು ಸಹಾ ಸಡಿಲ ವಾಗಿ ಗೋಡೆಗೆ ಆನಿಸಿ ನಿಲ್ಲಿಸಲಾಗಿದೆ. ಮತ್ತು ಇದರ ಗರ್ಭಗುಡಿಯ ಛಾವಣಿಯು ಕುಸಿಯುತ್ತಿದೆ. ಜನಾ ರ್ಧನನ ಹಿಂಭಾಗದ ಪ್ರಭಾವಳಿಯಲ್ಲಿ ವಿಷ್ಣುವಿನ ದಶಾ ವತಾರದ ಬಿಂಬಗಳಿವೆ. ಕೊನೆಯಲ್ಲಿ ಬುದ್ಧನ ಬಿಂಬವೂ ಕಂಡುಬರುತ್ತದೆ. ಈ ಗರ್ಭಗುಡಿಯ ಎದುರಿಗೆ ಹಾಗೂ ಮಧ್ಯದ ಗರ್ಭಗೃಹದ ಬಲಗಡೆ ಇರುವ ಗರ್ಭಗೃಹದಲ್ಲಿ ಶಿವಲಿಂಗವನ್ನು ಇರಿಸಲಾಗಿದೆ. ನವರಂಗದ ಕಂಬಗಳು ಬೃಹದಾಕಾರವಾಗಿದ್ದು ಮಧ್ಯದಲ್ಲಿ ಕೂರ್ಮದ ಉಬ್ಬು ಶಿಲ್ಪವಿದೆ. ನವರಂಗದ ಮಹಾದ್ವಾರದ ಲಲಾಟದಲ್ಲಿ ಲಕ್ಷ್ಮೀನರಸಿಂಹನ ಉಬ್ಬುಶಿಲ್ಪವಿರುವುದರಿಂದ ಇದನ್ನು ಮೂಲತಃ ವೈಷ್ಣವ ದೇವಾಲಯವೆನ್ನುವುದರಲ್ಲಿ ಸಂದೇಹವಿಲ್ಲ. ಅಲ್ಲದೆ, ಅಥಣಿ ತಾಲ್ಲೂಕಿನ ಮೂರ ಗುಂಡಿಯಲ್ಲಿ ದೊರೆತ ತಾಮ್ರಶಾಸನವೊಂದರಲ್ಲಿ(ಕ್ರಿ.ಶ. ೧೧೮೩) ಸತ್ತಿತ್ತಿ ಮಹಾ ಅಗ್ರಹಾರದ ನರಸಿಂಹನ ದೇವಾಲಯಕ್ಕೆ ಚಾಳುಕ್ಯ ದಂಡಾಧಿಕಾರಿಯಾಗಿದ್ದ ಸೋಮ ಚಾಮುಪತಿ ಎಂಬುವನು ನೀಡಿದ ಹಲವು ದಾನಗಳ ಉಲ್ಲೇಖವಿದೆ. ಈ ದೇವಾಲಯದ ಹೊರ ಆವರಣವು ಪೂರ್ಣವಾಗಿ ಮಣ್ಣಿನಿಂದ ಆವೃತ್ತವಾಗಿದ್ದು, ಇದರ ಛಾವಣಿಯು ಇಂದಿನ ಭೂಮಿಯ ಮಟ್ಟಕ್ಕಿರು ವುದು ಆಶ್ಚರ್ಯಕರವಾಗಿದೆ.

ಸತ್ತಿಯಿಂದ ಪೂರ್ವಕ್ಕೆ ೧೦ ಕಿ.ಮೀ. ದೂರದಲ್ಲಿ ಕೃಷ್ಣಾನದಿಯ ಪಾತ್ರವನ್ನೇ ಅನುಸರಿಸಿ ಹೋದರೆ ಸಿಗುವ ಮತ್ತೊಂದು ಪೂರ್ವೇತಿಹಾಸದ ತಾಣವೆಂದರೆ ಸವದಿ. ಊರಿನ ತುಂಬಾ ಕಲ್ಯಾಣ ಚಾಳುಕ್ಯರ ಕಟ್ಟಡ ಗಳು ಹಾಗೂ ದೇವಾಲಯಗಳ ಅವಶೇಷಗಳು ಕಾಣ ಸಿಗುತ್ತವೆ. ಕೃಷ್ಣಾನದಿಯ ದಂಡೆಯ ಮೇಲೆ ಇರುವ ಗೋಪಾಲಕೃಷ್ಣ ದೇವಾಲಯ ನಕ್ಷತ್ರಾಕಾರವಾದ ಸ್ಥಳ ವಿನ್ಯಾಸವಿರುವ ತ್ರಿಕೂಟಾಚಲವಾಗಿದೆ. ಮಧ್ಯದ ಗರ್ಭ ಗುಡಿಯಲ್ಲಿ ಕೊಳಲು ಹಿಡಿದಿರುವ ವೇಣುಗೋಪಾಲ, ಬಲಗಡೆ ಮತ್ತು ಎಡಗಡೆಯ ಗರ್ಭಗೃಹದಲ್ಲಿ ಶಿವಲಿಂಗ ಗಳು ಕಂಡುಬರುತ್ತವೆ. ಆದರೆ, ಈ ಎರಡೂ ಗರ್ಭ ಗೃಹಗಳ ದ್ವಾರದ ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬು ಶಿಲ್ಪವಿದೆ. ಮಧ್ಯದ ಗರ್ಭಗುಡಿಯ ದ್ವಾರದ ಲಲಾಟ ದಲ್ಲಿ ಯೋಗನಾರಾಯಣನ ಉಬ್ಬುಶಿಲ್ಪವಿದೆ. ದೇವಾ ಲಯದ ಸುತ್ತಲೂ ಮುಳ್ಳಿನ ಗಿಡಗಳು ಆವರಿಸಿರುವುದ ರಿಂದ ಅದರ ಹೊರಭಾಗದ ವೀಕ್ಷಣೆ ಸಾಧ್ಯವಿಲ್ಲ. ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಎದುರಿಗೆ

ಕೃಷ್ಣಾನದಿಯು ಹರಿಯುತ್ತಿದ್ದು ಅತ್ಯಂತ ರಮಣೀಯ ದೃಶ್ಯವಾಗಿದೆ. ನದಿಯ ಆಚೆಯ ದಡದಲ್ಲಿ ಜಮಖಂಡಿ ತಾಲ್ಲೂಕಿನ ಪೂರ್ವೇತಿಹಾಸದ ಚಿತ್ರಕಲೆಗಳನ್ನು ಹೊಂದಿರುವ ಗೊಂಬಿಗುಡ್ಡವಿದೆ. ಆದರೆ, ನದಿಯನ್ನು ದಾಟಿ ಹೋಗಲು ಸೌಕರ್ಯವಿಲ್ಲ. ಈ ಸ್ಥಳದಲ್ಲಿ ಕಲ್ಯಾಣ ಚಾಳುಕ್ಯರ ಕಾಲದ ಒಂದು ಜೈನ ಬಸದಿ ಇದೆ. ಗರ್ಭಗೃಹದಲ್ಲಿ ಆದಿನಾಥ ಮೂರ್ತಿ ಇದೆ ಮತ್ತು ಬಸದಿಯ ಇತರೆ ಭಾಗಗಳು ಸಂಪೂರ್ಣವಾಗಿ ನಾಶವಾಗಿವೆ. ಆದಿನಾಥನ ವಿಗ್ರಹದ ಪೀಠದ ಮೇಲೆ ಅಪ್ರಕಟಿತ ಕನ್ನಡ ಶಾಸನವಿದೆ. ಬಸದಿಯ ಸಮೀಪದಲ್ಲೇ ಲೇಥ್‌ನಿಂದ ತಿರುಗಿಸಿದ ಹಲವಾರು ಕಂಬಗಳಿವೆ ಹಾಗೂ ಸಾಕಷ್ಟು ಐತಿಹಾಸಿಕ ಅವಶೇಷಗಳಿವೆ. ಸವದಿಯನ್ನು ತಲುಪಲು ಸೂಕ್ತ ಮಾರ್ಗ ಹಾಗೂ ಸಾರಿಗೆ ವ್ಯವಸ್ಥೆ ಇದ್ದರೆ, ಇದನ್ನು ಆಕರ್ಷಣೀಯ ಸ್ಥಳವನ್ನಾಗಿ ಪರಿವರ್ತಿಸಲು ಸಾಧ್ಯವಿದೆ.

ಸವದಿಯಿಂದ ಅಥಣಿಗೆ ಹೋಗುವ ದಾರಿಯಲ್ಲಿ ಕಂಡುಬರುವ ಎರಡು ಮುಖ್ಯ ಪ್ರದೇಶಗಳೆಂದರೆ ನಂದಗಾವ ಮತ್ತು ಕೊಕಟನೂರು. ನಂದಗಾವ ಯಲ್ಲಮ್ಮನ ವಾಡಿಯ ಹಾದಿಯಲ್ಲಿ ಸಿಗುವ ಬಹುಮುಖ್ಯವಾದ ಸ್ಥಳ. ಇಲ್ಲಿರುವ ತ್ರಿಕೂಟಾಚಲ ದೇವಾಲಯವು ಚಾಳುಕ್ಯರ ಶೈಲಿಯ ಬಹು ಸುಂದರ ಶಿಲ್ಪಕಲಾ ಪರಿಪೂರ್ಣತೆಯನ್ನು ಹೊಂದಿರುವ ಕಟ್ಟಡವೆನ್ನಬಹುದು. ತ್ರಿಕೂಟ ಗರ್ಭಗುಡಿಗಳ ಮುಂಭಾಗದಲ್ಲಿರುವ ನವರಂಗವು ವಿಪುಲ ಕೆತ್ತನೆಗಳಿಂದ ಅಲಂಕೃತಗೊಂಡಿರುವ ಸ್ತಂಭಗಳನ್ನು ಹೊಂದಿದೆ. ಮುಂದೆ ಕಿರಿದಾದ ಮಂಟಪ ಮತ್ತು ಅಲ್ಲಿಂದ ಮುಂದೆ ಷಟ್‌ಕೋನಾಕಾರವಾದ (hexagonal) ಸುಂದರ ಮುಖಮಂಟಪವಿದೆ. ಇದು ಬಹುಮಟ್ಟಿಗೆ ಬೆಳಗಾವಿ ಕೋಟೆಯೊಳಗಿರುವ ಕಮಲ ಬಸ್ತಿಯನ್ನು ಹೋಲುತ್ತದೆ. ಅದರಂತೆಯೇ ಇದರ ಛಾವಣಿಯಲ್ಲಿ ಕಮಲದಳಗಳ ಕೆತ್ತನೆಯಿಂದ ರಚಿಸಲಾಗಿರುವ ಕೆಳಮುಖವಾಗಿರುವ ದೊಡ್ಡ ಕಮಲದ ಹೂವಿನ ಸೂಕ್ಷ್ಮಕೆತ್ತನೆ ಇದೆ. ಇಲ್ಲಿಯ ಶಿಲ್ಪಗಳು ಕೆತ್ತನೆಯಲ್ಲಿ ಕಲಾಪರಿಪೂರ್ಣತೆ ಪಡೆದಿರುವುದು ಪ್ರಶಂಸನೀಯ. ಈ ಮುಖಮಂಟಪದ ದ್ವಾರದ ಮುಂಭಾಗದಲ್ಲಿ ಎರಡು ಎತ್ತರವಾದ ವೈಷ್ಣವ ದ್ವಾರಪಾಲಕರ ಮೂರ್ತಿಗಳು ಇದ್ದು, ಅದರಲ್ಲಿ ಒಂದು ಬಿದ್ದುಹೋಗಿದೆ. ದೇವಾಲಯದ ಮೂರು ಗರ್ಭಗೃಹಗಳೂ ಖಾಲಿ ಇವೆ. ಮಧ್ಯದಲ್ಲಿರುವ ಗರ್ಭಗೃಹದ ದ್ವಾರದ ಲಲಾಟದಲ್ಲಿ ಗಣಪತಿಯ ಉಬ್ಬುಶಿಲ್ಪವಿದೆ, ಹಾಗೂ ಉಳಿದೆರಡು ಗರ್ಭಗೃಹದ ದ್ವಾರದ ಲಲಾಟಗಳಲ್ಲಿ ಗಣಪತಿ ಮತ್ತು ವಿಷ್ಣುವಿನ ಉಬ್ಬುಶಿಲ್ಪಗಳಿವೆ. ಎಲ್ಲಾ ದ್ವಾರಗಳ ಪಕ್ಕದಲ್ಲಿ ಜಾಲಂಧ್ರಗಳಿವೆ. ನವರಂಗದ ಛಾವಣಿಯಲ್ಲಿರುವ ಭುವನೇಶ್ವರಿಯು ತಾವರೆಯ ಹೂವಿನ ವಿನ್ಯಾಸದಿಂದ ಅಲಂಕೃತಗೊಂಡಿದೆ. ಮಧ್ಯದ ಗರ್ಭಗೃಹದ ಮಹಾದ್ವಾರದ ಮೇಲ್ಭಾಗದಲ್ಲಿ ನಟರಾಜ ಹಾಗೂ ಅಷ್ಟದಿಕ್ಪಾಲಕರು ಮತ್ತು ಮಕರತೋರಣಗಳ ಅಲಂಕಾರವಿದೆ.

ನಂದಗಾವ್‌ನಿಂದ ಸಮೀಪದಲ್ಲೇ (೩ ಕಿ. ಮೀ. ದೂರದಲ್ಲಿ) ಕೃಷ್ಣಾನದಿಯ ತೀರದಲ್ಲಿ ಇರುವ ಪ್ರಾಚೀನ ಕೊಕಟನೂರು ಅಥವಾ ಶಾಸನಗಳಲ್ಲಿ ಉಕ್ತವಾಗಿರುವ ಕೊಗ್ಗಟ್ಟನೂರು ಅಗ್ರಹಾರವು ಅಥಣಿ ತಾಲ್ಲೂಕಿನ ಮತ್ತೊಂದು ಮುಖ್ಯವಾದ ಸ್ಥಳ. ಈ ಊರಿನಲ್ಲೂ ತ್ರಿಕೂಟಾಚಲ ದೇವಾಲಯವು ಬಹುಶಃ ಕ್ರಿ. ಶ. ೧೧ನೇ ಶತಮಾನದ ಮಧ್ಯಭಾಗದಲ್ಲಿ ನಿರ್ಮಿತವಾಗಿರುವುದೆಂದು ಅಲ್ಲಿಯ ಶಾಸನಗಳಿಂದ ತಿಳಿದುಬರುತ್ತದೆ. ಈ ದೇವಾಲಯವನ್ನು ಶಾಸನಗಳಲ್ಲಿ 'ತ್ರಿಪುರುಷ' ದೇವಾಲಯವೆಂದು ಕರೆಯಲಾಗಿದೆ. ಇದು ತ್ರಿಕೂಟಾಚಲವಾಗಿದ್ದು ಎಲ್ಲಾ ಗರ್ಭಗುಡಿಗಳಲ್ಲೂ ಶಿವಲಿಂಗಗಳಿವೆ. ಆದರೆ ಮಧ್ಯದ ಮತ್ತು ಎಡಭಾಗದ ಗರ್ಭಗೃಹದ ದ್ವಾರಗಳಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪಗಳಿವೆ ಹಾಗೂ ಬಲಭಾಗದ ಗರ್ಭಗೃಹದ ಲಲಾಟದಲ್ಲಿ ವಿಷ್ಣುವಿನ ಬಿಂಬವಿದೆ. ಎಲ್ಲಾ ಗರ್ಭಗೃಹದ ಮುಂಭಾಗದಲ್ಲೂ ಪ್ರತ್ಯೇಕ ಅರ್ಧಮಂಟಪವಿದೆ ಹಾಗೂ ಒಂದು ವಿಶಾಲವಾದ ಸಾಮಾನ್ಯ ನವರಂಗವಿದೆ. ಈ ದೇವಾಲಯದ ಗರ್ಭಗೃಹ ಹಾಗೂ ಅರ್ಧಮಂಟಪಗಳ ದ್ವಾರಗಳಲ್ಲಿ ಜಾಲಂಧ್ರಗಳಿವೆ. ಇದೇ ದೇವಾಲಯದ ಪರಿಸರದಲ್ಲಿ ಮೂರು ಶಿಲಾಶಾಸನಗಳಿದ್ದು ಎಲ್ಲವೂ ಪ್ರಕಟಗೊಂಡಿವೆ. ಅಥಣಿಯಿಂದ ಪೂರ್ವಕ್ಕೆ ಬಿಜಾಪುರ ರಸ್ತೆಯಲ್ಲಿ ಹೋಗಿ ನಂತರ ಎಡಭಾಗಕ್ಕೆ ತಿರುಗಿ ಸ್ವಲ್ಪ ದೂರ ಹೋದರೆ ಗುಡ್ಡಗಳ ಮಧ್ಯದಲ್ಲಿ ಕಾಣುವ ಪ್ರದೇಶವೇ ರಾಮತೀರ್ಥ ಎಂದು ಕರೆಯಲ್ಪಡುವ ಸುಂದರ ತಾಣ. ಈ ಸ್ಥಳದಲ್ಲಿರುವ

ರಾಮೇಶ್ವರ ದೇವಾಲಯವು ಅತ್ಯಂತ ವಿಶಾಲವಾದ ನಿವೇಶನದಲ್ಲಿ ನಿರ್ಮಿತವಾಗಿರುವ ಕಲ್ಯಾಣ ಚಾಳುಕ್ಯರ ಕಟ್ಟಡ. ಮುಖ್ಯ ದೇವಾಲಯವು ತ್ರಿಕೂಟಾಚಲವಾಗಿದ್ದು ಪ್ರತ್ಯೇಕ ಅರ್ಧಮಂಟಪಗಳನ್ನು ಹಾಗೂ ವಿಶಾಲವಾದ ನವರಂಗವನ್ನು ಹೊಂದಿದೆ. ಈ ದೇವಾಲಯದ ಮುಖ ಮಂಟಪವು ಸಹಾ ವಿಶಾಲವಾಗಿದ್ದು ಮುಂಭಾಗದಲ್ಲಿ ಎತ್ತರವಾದ ಬೃಹದ್ ಮರದ ಬಾಗಿಲುಗಳಿವೆ. ಮಧ್ಯದ ಗರ್ಭಗೃಹದ ಮೇಲ್ಭಾಗದಲ್ಲಿ ಕದಂಬನಾಗರ ಶಿಖರವಿದೆ. ಈ ದೇವಾಲಯದ ಪರಿಸರದಲ್ಲಿ ಎರಡು ಶಾಸನಗಳಿದ್ದು, ಅದರಲ್ಲಿ ಒಂದು ಕ್ರಿ.ಶ. ೧೧೬೭ರ ಕಾಲಕ್ಕೆ ಸೇರಿದ್ದು, ಸಿಂಧುವೇದ ಎಂಬ ಬಿಜ್ಜಳನ ಅಧಿಕಾರಿಯು ರಾಮೇಶ್ವರ ದೇವಾಲಯಕ್ಕೆ ಮಾಡಿದ ದಾನಗಳ ಬಗೆಗೆ ಉಲ್ಲೇಖಿಸುತ್ತದೆ. ನವರಂಗದ ಮಹಾದ್ವಾರದ ಎರಡೂ ಕಡೆಗಳಲ್ಲಿ ಎತ್ತರವಾದ ದ್ವಾರಪಾಲಕರ ಮೂರ್ತಿಗಳಿವೆ. ಮುಖ ಮಂಟಪದ ಸುತ್ತಲೂ ಕಕ್ಷಾಸನವಿದೆ. ದೇವಾಲಯದ ಪ್ರಾಕಾರದ ಸುತ್ತಲೂ ಸಣ್ಣಪುಟ್ಟ ದೇವಾಲಯಗಳಿವೆ. ಹಿಂಭಾಗದಲ್ಲಿ ಪಾರ್ವತಿ ದೇವಸ್ಥಾನವು ಎತ್ತರವಾದ ಗುಡ್ಡದ ಕೆಳಭಾಗದಲ್ಲಿದೆ. ಇದರ ಪಕ್ಕದಲ್ಲಿ ಗವಿಯ ದ್ವಾರವಿದ್ದು, ಇದು ದೂರದ ಒಂದು ಕ್ಷೇತ್ರಕ್ಕೆ ಹೋಗುವುದೆಂದು ಪ್ರತೀತಿ ಇದೆ. ಮುಖ್ಯ ದೇವಾಲಯದ ಎದುರು ಭಾಗದಲ್ಲಿ ಎತ್ತರವಾದ ಧ್ವಜಸ್ತಂಭವಿದೆ. ಇಲ್ಲಿಗೆ ಸಮೀಪದಲ್ಲೇ ಇರುವ ತೆಲಸಂಗ ಎಂಬ ಪ್ರದೇಶವು ಪ್ರಾಚೀನ ಘಟಿಕಾಸ್ಥಾನವಾಗಿತ್ತೆಂದು ಶಾಸನಾಧಾರಗಳಿಂದ ತಿಳಿದುಬರುತ್ತದೆ. ಶಾಸನಗಳಲ್ಲಿ ಈ ಸ್ಥಳವನ್ನು 'ತೆಲ್ಲಿಸಂಗ'ವೆಂದು ಕರೆಯಲಾಗಿದೆ. ಈಗ ಶ್ರೀನಿವಾಸ ದೇವಾಲಯದಲ್ಲಿ ಎರಡು ಎತ್ತರವಾದ ಚಾಳುಕ್ಯ ಶೈಲಿಯ ವಿಷ್ಣುವಿನ ಶಿಲಾಪ್ರತಿಮೆಗಳು ಕಂಡುಬರುತ್ತಿದ್ದು, ಇವೆರಡೂ ಇದೇ ಊರಿನ ಹೊರಗೆ ಇರುವ ಗದ್ದೆಯ ಬಯಲಿನಲ್ಲಿ ಉತ್ಖನನ ಮಾಡುತ್ತಿದ್ದಾಗ ಸಿಕ್ಕಿದುವೆಂದು ಸ್ಥಳೀಯರು ಹೇಳುತ್ತಾರೆ.

ಅಥಣಿ ತಾಲ್ಲೂಕಿನ ವಿವಿಧ ಭಾಗಗಳಲ್ಲಿ ಕಂಡುಬರುವ ಕಲ್ಯಾಣ ಚಾಳುಕ್ಯರ ಕಾಲದ ದೇವಾಲಯಗಳ ಸ್ಥೂಲ ಪರಿಚಯದಿಂದ ಎರಡು ವಾಸ್ತುವಾಂಶಗಳು ವ್ಯಕ್ತವಾಗುತ್ತವೆ. ಮೊದಲನೆಯದಾಗಿ, ಒಂದೇ ತಾಲ್ಲೂಕಿನಲ್ಲಿ ಅದರಲ್ಲೂ ಕೃಷ್ಣಾನದಿಯ ತೀರದುದ್ದಕ್ಕೂ ಸಿಗುವ ಚಾಳುಕ್ಯರ ದೇವಾಲಯಗಳು ಬೇರೆ ಯಾವುದೇ ಜಿಲ್ಲೆಯಲ್ಲೂ ಕಂಡುಬಾರದೇ ಇರುವುದು ; ಹಾಗೂ ಎರಡನೆಯದಾಗಿ, ಎಲ್ಲ ದೇವಾಲಯಗಳೂ (ಬಹುತೇಕವಾಗಿ) ತ್ರಿಕೂಟಾಚಲಗಳಾಗಿರುವುದು. ಉತ್ತರಕರ್ನಾಟಕದ ನೆರೆಹೊರೆಯ ಜಿಲ್ಲೆಗಳಿಗಿಂತಲೂ ಬೆಳಗಾವಿ ಜಿಲ್ಲೆಯು ಅಧಿಕ ಸಂಖ್ಯೆಯಲ್ಲಿ ಕಲ್ಯಾಣ ಚಾಳುಕ್ಯರ, ರಟ್ಟರ ಹಾಗೂ ಗೋವೆ ಕದಂಬರ ಸಮಕಾಲೀನ ಶೈಲಿಯ ದೇವಾಲಯಗಳನ್ನು ಹೊಂದಿರುವುದು ಗಮನೀಯವಾಗಿದೆ.

ಅಥಣಿ ತಾಲ್ಲೂಕಿನ ಚಾಳುಕ್ಯರ ದೇವಾಲಯಗಳ ಮೂಲ ಅಧ್ಯಯನದೊಡನೆ ಹೇಳಬೇಕಾದ ಇನ್ನೊಂದು ಮುಖ್ಯ ಅಂಶವೆಂದರೆ, ಕೃಷ್ಣಾನದಿಯು ಪಾತ್ರವನ್ನು ವಹಿಸಿ ಮತ್ತಷ್ಟು ಸ್ಥಳಗಳನ್ನು ಅವಲೋಕಿಸಿದರೆ ನಮಗೆ ಅಸಂಖ್ಯಾತ ಪೂರ್ವೇತಿಹಾಸದ ನಿವೇಶನಗಳು ದೊರೆಯುತ್ತವೆ.

## ಆಧಾರ ಗ್ರಂಥಗಳು


1. Suryanath U. Kamath (Ed.) : *Belgaum District Gazetteer*, Bangalore, 1987
2. H. J. Stokes : *Historical Account of the Belgaum District in Bombay Presidency*, Bombay, 1870
3. James M. Campbell : *Gazetteer of the Bombay Presidency, Belgaum*, Bombay, 1884

4. R. S. Panchamukhi (Ed.) : *Karnataka Inscriptions*, Vol. I, II, & III, Part I, 1941, 1952 & 1953

5. B. R. Gopal (Ed.) : *Karnataka Inscriptions*, Vol. V & VI, 1969 & 1973 ; *The Chalukyas of Kalyana and the Kalachuris*, Dharwad, 1981

6. K. V. Soundar Rajan : *South Indian Temple Styles*, New Delhi, 1972

7. ಸೂರ್ಯನಾಥ ಯು. ಕಾಮತ್ (ಸಂ.) : ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-ಎರಡು, ಬೆಂಗಳೂರು, ೧೯೮೩



ಸನ್ನತಿ : ಯಕ್ಷನ ಶಿಲ್ಪ (ಮುಂಭಾಗ)



ಸನ್ನತಿ : ಯಕ್ಷನ ಶಿಲ್ಪ (ಹಿಂಭಾಗ)



ಸನ್ನತಿ : ಮಿಥುನ ಶಿಲ್ಪ (ಮುಂಭಾಗ)



ಸನ್ನತಿ : ಮಿಥುನ ಶಿಲ್ಪ (ಹಿಂಭಾಗ)

(ಲೇಖನ ೧) (ಕೃಪೆ : ರಾಜ್ಯ ಪುರಾತತ್ತ್ವ ಮತ್ತು ವಸ್ತು ಪ್ರದರ್ಶನಾಲಯಗಳ ನಿರ್ದೇಶನಾಲಯ)









ಹಳೇ ಕಡಿವಾಳ, ಬೇವಿನಾಳ, ಗೂಡೂರು ಮತ್ತು ಹಿರೇಮಾಗಿಗಳಲ್ಲಿಯ
ಪ್ರಾಗೈತಿಹಾಸಿಕ ಉಪಕರಣ ಇತ್ಯಾದಿ
(ಲೇಖನ ೨)







ಗುಮ್ಮಳಾಪುರದ ಗೌರಮ್ಮನ ಗುಡಿಯ
ಮುಂದಿನ ಶಾಸನ (ಲೇಖನ ೨)



ಬಾಗಳಿ ಕಂಚಿನ ಪತ್ರ (ಲೇಖನ ೮ (ಚಿತ್ರ ಮುರಲಿ ಕಲಘಟಗಿ



ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಕಂಬ :
ಅಹಲ್ಯಾ–ಇಂದ್ರ ಕಥೆಯ ನಿರೂಪಣೆ ಮುಂದುವರೆದದ್ದು
– ಪೂರ್ವಮುಖ



ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಕಂಬ :
ಅಹಲ್ಯಾ–ಇಂದ್ರ ಕಥೆಯ ನಿರೂಪಣೆ –ದಕ್ಷಿಣ ಮುಖ
(ಲೇಖನ ೧೫)



ತ್ಯಾಗದ ಬ್ರಹ್ಮದೇವರ ಕಂಬ (ದಕ್ಷಿಣ ಮುಖ)
(ಕೃಪೆ : ಮೈಸೂರು ಪುರಾತತ್ತ್ವ ಇಲಾಖೆ)
(ಲೇಖನ ೪)



ಖಾನಾಪುರದ ಜೈನ ಯಕ್ಷಿ ಪದ್ಮಾವತಿ
(ಕೃಪೆ : ಡಾ॥ ಅ. ಸುಂದರ)
(ಲೇಖನ ೧೬)



ಕೊಟ್ಟೂರು : ಮೂರುಕಲ್ಲು ಮಠ (ಮುಂಭಾಗ)



ಕೊಟ್ಟೂರು : ಮೂರುಕಲ್ಲು ಮಠ (ಹಿಂಭಾಗ)



ಕೊಟ್ಟೂರು : ಸಿರಿ ಮಠ, ನಂದಿವಿಗ್ರಹ
(ಚಿತ್ರ/ದಿವಾಕರ ಎಸ್. ಕೊಟ್ಟೂರು) (ಲೇಖನ ೧೦)



ಕೊಟ್ಟೂರು : ಮೂರುಕಲ್ಲು ಮಠ (ಗರ್ಭಗೃಹ)



ಕೊಟ್ಟೂರು : ಸಿರಿ ಮಠ, ಗರ್ಭಗೃಹ



ಪಾಟೇಶ್ವರ : ಸಹಸ್ರಲಿಂಗ



ಪಾಟೇಶ್ವರ : ಸಹಸ್ರಲಿಂಗ (ಸಮೂಹ)



ಪಾಟೇಶ್ವರ : ಲಿಂಗಗಳು



ಪಾಟೇಶ್ವರ : ವಿಷ್ಣು ಅವತಾರ

(ಲೇಖನ ೧೯)



ಪಾಟೇಶ್ವರ : ಮುಖ್ಯದೇವಾಲಯದ
ಬಲ ದೇವಕೋಷ್ಠದಲ್ಲಿರುವ ಗಣೇಶಾನಿ



ಪಾಟೇಶ್ವರ : ಚಾಮುಂಡಿ



ರಾಮತೀರ್ಥ ದೇವಾಲಯ, ಅಥಣಿ

(ಚಿತ್ರಗಳು/ಅ. ಲ. ನರಸಿಂಹನ್) (ಲೇಖನ ೧೩)




ವಿಷ್ಣು, ತೆಲಸಂಗ



ಪಾರ್ಶ್ವನಾಥ, ಸವಗಿ




ವಿಷ್ಣು, ಸತ್ತಿ



ಜೈನ ದೇವಾಲಯ, ಐನಾಪುರ



ರೇಖಾಚಿತ್ರ, ಪಾಳುಬಸ್ತಿ, ಐನಾಪುರ

(ಚಿತ್ರಗಳು/ಅ. ಲ. ನರಸಿಂಹನ್) (ಲೇಖನ ೧೨)



ಉಬ್ಬುಶಿಲ್ಪ, ಕೊಟ್ಟೂರು



ಕಲ್ಲಿನ ಮೇಲೆ ಕೊರೆದ ರೇಖಾಚಿತ್ರ, ಐನಾಪುರ (ಬಸ್ತಿ)



ಕಲ್ಲೇಶ್ವರ ದೇವಸ್ಥಾನ, ಗೋಣಿ ತುಮಕೂರು
(ಲೇಖನ ೧೩)



ಸಿಂದಗಿ : ನಂದಿಯ ಕೊರಳ ಮುಂದಿರುವ ಯತಿಚಿತ್ರ
(ಲೇಖನ ೧೪)



ಸಿಂದಗಿ : ಪೀಠದ ಮೇಲಿರುವ ಶ್ರೀ ತೋಂಟದ ಸಿದ್ಧಲಿಂಗ
ಯತಿಗಳು ಮತ್ತು ಅವರ ಶಿಷ್ಯರು ಇತ್ಯಾದಿ



ಸಿಂದಗಿ : ಆಕಳು ಕಾಲುಗಳ ಮುದ್ರೆಗಳು ಮತ್ತು ತೊಟ್ಟಿ



ನಂಜರಾಯಪಟ್ಟಣದ ದೇವಾಲಯ



ಪಾಲ್ಪರೆಯ ಸೋಮೇಶ್ವರ (?) ದೇಗುಲದ ಪಾರ್ಶ್ವನೋಟ

(ಲೇಖನ ೨೪)



ನಂಜರಾಯಪಟ್ಟಣದ ವೀರಭದ್ರ ದೇಗುಲ



ಅಮ್ಮಾಳೆ ಪಂಚಲಿಂಗೇಶ್ವರ ಗುಡಿಯ ಅವಶೇಷ ಮತ್ತು ಶಿಲ್ಪಗಳು



ಪಾಲ್ಪರೆಯ ವೀರಭದ್ರ ಶಿಲ್ಪ



ನಂಜರಾಯಪಟ್ಟಣದ ಯದುಗಳ



ನಂಜರಾಯಪಟ್ಟಣದ ವೀರಶಿಲ್ಪ

(ಲೇಖನ ೨೪)



ಪಾಲ್ಪರೆಯಲ್ಲಿದ್ದ ಶ್ರೀರಂಗ (ವಿಷ್ಣು) ದೇವಾಲಯದ ಅವಶೇಷಗಳು



ಚಿತ್ರದುರ್ಗ ಬೆಟ್ಟ: ಗೋಪಾಲಸ್ವಾಮಿ ಹೊಂಡ, ಗೋಪಾಲಕೃಷ್ಣ ದೇವಾಲಯ ಮತ್ತು
ಪೆರುಮಾಳೇಪುರದ ನಿವೇಶನ (ಲೇಖನ ೨೫)



ಚಿತ್ರದುರ್ಗ ಬೆಟ್ಟ: ಶೃಂಗಾರತೋಟದ ಬಯಲು ಮತ್ತು
ಗೋಪಾಲಕೃಷ್ಣ ದೇವಾಲಯ



ಚಿತ್ರದುರ್ಗ ಬೆಟ್ಟ: ಗೋಪಾಲಕೃಷ್ಣ ದೇವಾಲಯದ ನವರಂಗದಲ್ಲಿರುವ
ನಾಯಕ ಮತ್ತು ನಾಗತಿಯರ (?) ಉಬ್ಬುಶಿಲ್ಪಗಳು



ಚಿತ್ರದುರ್ಗ ಬೆಟ್ಟ: ಗರುಡಾಂಜನೇಯ ಬಾಗಿಲು (ಹಿಮ್ಮುಖ)

(ಲೇಖನ ೨೫)



ಚಿತ್ರದುರ್ಗ ಬೆಟ್ಟ: ಸುಬ್ರಹ್ಮಣ್ಯೇಶ್ವರ ದೇವಾಲಯ



ಚಿತ್ರದುರ್ಗ ಬೆಟ್ಟ: ಬ್ರಹ್ಮಪುರಿಗೇರಿಯಿದ್ದ ಇಂದಿನ ಅರಮನೆ ಅವಶೇಷಗಳ ಆವರಣ

(ಲೇಖನ ೨೫)